ಮೊದಲು ನಮ್ಮ ಹಂಬಲ ಹಿರಿದಾಗಲಿ,
ಸಿದ್ಧಿಯೂ ಹತ್ತಿರಕ್ಕೆ ಬರುತ್ತದೆ.

–ತೀ. ನಂ. ಶ್ರೀ.

---

# ಸಂಚಯ

(ಕಲಾಸಕ್ತರ ದ್ವೈಮಾಸಿಕ)

ಸಂಚಿಕೆ : 18 ಜುಲೈ : 1990

---

## ಈ ಸಂಚಿಕೆಯಲ್ಲಿ....



---

ಸಂಪಾದಕರು : ಡಿ. ವಿ. ಪ್ರಹ್ಲಾದ್ ಮತ್ತು ಮಂಡಳಿ

ವಾರ್ಷಿಕ ಚಂದಾ : ರೂ. 25–00

ಆಜೀವ ಚಂದಾ : ರೂ. 250–00 ಎರಡು ಕಂತುಗಳಲ್ಲಿ

ಮುಖ ಚಿತ್ರ : ಜಾನ್ ದೇವರಾಜ್‌ರ ಕೃತಿ

ಕೃಪೆ : ಲಲಿತಕಲಾ ಅಕಾಡೆಮಿ

ಸಂಚಯದ ವಿಳಾಸ : ನಂ. 28, ಮಾರಮ್ಮನ ದೇವಸ್ಥಾನದ ರಸ್ತೆ
8ನೇ ಕ್ರಾಸ್, ಮಲ್ಲೇಶ್ವರಂ
ಬೆಂಗಳೂರು–560 003

# ಹೊಸ ದಿಕ್ಕುಗಳ ಹುಡುಕಾಟದತ್ತ ಕಾವ್ಯ*

ಮಲ್ಲೇಪುರಂ ಜಿ. ವೆಂಕಟೇಶ್

In a world in which everything is quantified and abstracted, art the highest, form of Expression of every-thing concrele and quantitative in human life enters in to a contradiction with that alienated world becoming an incorroptible strong hold of humanity.

[VAZQUEZ ADOLEO SANCHEZ-Art and Society-1973 Page 116]

ವಾಜ್‌ಕ್ವೆಜ್ ಒಂದು ಸಂದರ್ಭದಲ್ಲಿ 'ಕಾವ್ಯ ಮನುಷ್ಯನ ಮೂರ್ತ ಸ್ವರೂಪವನ್ನು ಕಾಪಾಡುವ ಪ್ರಯತ್ನ ಮಾಡಿತು' ಎನ್ನುವ ಮಾತು, ನಮ್ಮ ಕಾಲದ ಕಾವ್ಯಕ್ಕೆ ಎಷ್ಟರ ಮಟ್ಟಿಗೆ ಅನ್ವಯಿಸಬಹುದೆಂದು ಆತಂಕದೊಡನೆ ಈ ಕೆಲವು ಮಾತುಗಳನ್ನು ಹೇಳಬೇಕಾಗಿದೆ. ಇಂದಿನ ಉತ್ಪಾದನೆಯ ಪೈಪೋಟಿ, ಮನುಷ್ಯನನ್ನು ಅಧೀನನನ್ನಾಗಿ ಮಾಡಿಕೊಂಡು ಅವನನ್ನೇ ಕಬಳಿಸಿಬಿಟ್ಟಿದೆ, ಮನುಷ್ಯನ ಅಸ್ತಿತ್ವವನ್ನೇ ಅಮೂರ್ತಗೊಳಿಸಿಬಿಟ್ಟಿದೆ. ಪಶ್ಚಿಮ ದೇಶದ ಈ ಬಿಕ್ಕಟ್ಟು ನಮ್ಮ ಕಾಲದ ಬಿಕ್ಕಟ್ಟಾಗಿಯೂ ನಮ್ಮ ಮುಂದೆ ಕಾಣಿಸುತ್ತಿದೆ. ವಾಜ್‌ಕ್ವೆಜ್ ಎತ್ತುವ ಈ ಪ್ರಶ್ನೆ ಕಾವ್ಯದ ಒಟ್ಟು ಧ್ಯಾನನಿಷ್ಠ ಕ್ರಿಯೆಯನ್ನು ಸಮರ್ಪಕವಾಗಿ ಹೊರಳಿಸುತ್ತದೆ.

1989ರ ಕಾವ್ಯಕೃಷಿಗೆ ಅನ್ವಯಿಸಬಹುದಾದ ಮಾತುಗಳನ್ನು ಇತ್ತೀಚಿನ ಕಾವ್ಯ ಕೃತಿಗಳಿಗೂ ಅನ್ವಯಿಸಬಹುದಾಗಿದೆ. ಒಟ್ಟು ಕಾವ್ಯದ ಸಂವೇದನೆ ಅದರ ರಚನಾ ನೆಲೆಗಳ ಹಿಂದೆ ಇರಬಹುದಾಗಿದೆ. ಈ ಎರಡು ಮಾದರಿಯ ಬಿಕ್ಕಟ್ಟು ಮತ್ತು ಆತಂಕಗಳು ಮನುಷ್ಯನನ್ನು ಎತ್ತಿ ನಿಲ್ಲಿಸಬಲ್ಲದು. 'ಮನುಷ್ಯನ ಅಸ್ತಿತ್ವ ಕಬಳಿಸುವಾಗ, ಕಾವ್ಯ ಅವನನ್ನು ರಕ್ಷಿಸುತ್ತಿದೆ!' ಎಂಬ ಮಾತುಗಳು ನಮ್ಮ ಕಾವ್ಯರಚನೆಯ ಹಿನ್ನೆಲೆಯಲ್ಲಿ ವಿಶ್ಲೇಷಿಸಲು ಇತ್ತೀಚಿನ ಕಾವ್ಯ ಕೃತಿಗಳು ಒತ್ತಾಯಿಸುತ್ತಿವೆ, ಈ

---

* ಈ ಲೇಖನ ಸಂಕ್ಷಿಪ್ತವಾಗಿ 'ಪ್ರಜಾವಾಣಿ'ದಲ್ಲಿ ಬಂದಿತ್ತು. ಇದನ್ನು ಬರೆಯಲು ಅನುವು ಮಾಡಿಕೊಟ್ಟ ಶ್ರೀ ಕೆ. ಎಸ್. ನಾರಾಯಣಸ್ವಾಮಿ ಅವರಿಗೆ ವಂದನೆಗಳು.

ಹಿನ್ನೆಲೆಯಲ್ಲಿ ಸದ್ಯದ ಕಾವ್ಯಕೃತಿಗಳನ್ನು ಪರಿಶೀಲಿಸಬಹುದಾಗಿದೆ. ನಾಟಕ ಕಾವ್ಯಗಳೆರಡರಲ್ಲೂ ಸೃಜನಶೀಲ ಪ್ರತಿಭೆಯಿಂದ ಅತ್ಯುತ್ತಮವಾದುದನ್ನು ಕೊಡುತ್ತ ಬಂದಿರುವ ಚಂದ್ರಶೇಖರ ಕಂಬಾರರು 'ಬೆಳ್ಳಿ ಮೀನು' ಸಂಕಲನವನ್ನು ಹೊರ ತಂದಿದ್ದಾರೆ. ಕಾವ್ಯದ ಏಕತಾನತೆಯನ್ನು ಒಡೆಯುವುದು ಮತ್ತು ಸದ್ಯದ ಸಾಂಸ್ಕೃತಿಕ ಬೇರುಗಳನ್ನು ಹುಡುಕುವುದು ಕಾವ್ಯದ ಉದ್ದೇಶವಾದರೂ ಅವರ ಅತ್ಯುತ್ತಮ ರಚನೆಯನ್ನು "ನಮಗೆ ಸ್ವತಂತ್ರವೇ ಇಲ್ಲ" (ಪುಟ 8) "ಶಿವಾಪುರದ ಹಾಡು" (ಪುಟ 75) "ನವಿಲೇ ನವಿಲೇ' (ಪುಟ 17) ಇವುಗಳಲ್ಲಿ ಕಾಣಬಹುದು. ಸಮೃದ್ಧತೆ, ಸಂಭ್ರಮ ಮತ್ತು ವಿಷಯವೇ ಕಂಬಾರರ ಕಾವ್ಯದ ಮೂಲ ನೆಲೆಗಳು. ಈ ಮೂಲ ನೆಲೆಗಳ ಹುಡುಕಾಟವೇ ಕಂಬಾರರ ಕಾವ್ಯದ 'ಗಂತವ್ಯ' ಡಿ. ಆರ್. ನಾಗರಾಜ್ ಮುನ್ನುಡಿಯಲ್ಲಿ ಹೇಳಿರುವ ಹಾಗೆ "ನಮ್ಮ ಈಗಿನ ಸನ್ನಿವೇಶದಲ್ಲಿ ಕಂಬಾರರ ಕಾವ್ಯದ ಪ್ರಸ್ತುತತೆಯನ್ನು ಕುರಿತು ಯೋಚಿಸಿದೆ. ಇದು ಎಲ್ಲ ಐಕ್ಯಗಳೂ ಚಿಂದಿ ಚೂರಾಗುವ ಸನ್ನಿವೇಶ. ಯಾವುದೇ ಹಂತದಲ್ಲಿ ಸಂಭ್ರಮ ಅಸಾಧ್ಯವಾಗಿರುವ ಸನ್ನಿವೇಶ, ದೊಡ್ಡ ಲೋಕದ ಒತ್ತಡ, ವೈಷಮ್ಯಗಳು ಚಿಕ್ಕ ಶೈಯ್ಯಾಗೃಹಕ್ಕೂ ಬಂದು ನುಗ್ಗುವ ಯುಗ ಇದು. ಇಂಥಾ ದಿಗ್ಭ್ರಮೆಯಿದ್ದೂ ಅದರಾಚೆಗೆ ಹಂಬಲಿಸುವ ಶಕ್ತಿ ಕಂಬಾರರ ಕಾವ್ಯಕ್ಕೆ ಇದೆ" ಎನ್ನುವುದು ಈ ಸಂಕಲನದ ಮಹತ್ವದ ಅಂಶಗಳಲ್ಲಿ ಒಂದು. ಶ್ರೀ ಯು. ಆರ್. ಅನಂತಮೂರ್ತಿಯವರು ತಮ್ಮ ಮನಸ್ಸು ಹಾಗೂ ವೀರ ಶೈಲಿಯನ್ನು ಕವಿತೆಯ ಪರಿಕ್ರಮದಲ್ಲಿ ಮಂಡಿಸಲು ಪ್ರಯತ್ನಿಸಿರುವ 'ಅಜ್ಜನ ಹೆಗಲ ಸುಕ್ಕುಗಳು' ಹಲವು ನೋಟಗಳಿಗೆ ನಮ್ಮ ಕಣ್ಣನ್ನು ಸೆಳೆಯುವಂಥಾ ಸಂಕಲನ "ಭೂತ, ವರ್ತಮಾನವನ್ನು ತನ್ನ ಹೆಗಲಲ್ಲೆತ್ತಿ ಭವಿಷ್ಯಕ್ಕೆ ನಡೆಸುತ್ತಿದೆ. ಭೂತ ಇಲ್ಲಿ ಅಜ್ಜ ಆಗಿರುವುದರಿಂದಲೇ ಪರಂಪರೆಗೆ ಅರ್ಥ ಪ್ರಾಪ್ತವಾಗಿದೆ. ಸವೆತ ಮತ್ತು ಸುಕ್ಕುಗಳು ಎರಡೂ ಇಲ್ಲಿ ಪರಂಪರೆಗೆ ಆರೋಪಿತವಾಗಿರುವುದರಿಂದ ಧೋರಣೆ ಸಹಜವಾಗಿಯೇ ಸಂಕೀರ್ಣತೆಯನ್ನು ಪಡೆಯುತ್ತದೆ" ಎಂಬ ಎಚ್. ಎಸ್. ವೆಂಕಟೇಶಮೂರ್ತಿಯವರ ಪ್ರವೇಶದ ಮಾತುಗಳು ಕಾವ್ಯದ ಓಘ ಮತ್ತು ಸತ್ವಗಳನ್ನು ಎತ್ತಿ ತೋರಿಸುತ್ತದೆ. ಅನಂತಮೂರ್ತಿಯವರ ಕಾವ್ಯ ಇರುವುದು ಸಮೃದ್ಧವಾದ ಕಾವ್ಯದ ಫಲವಂತಿಕೆಯಲ್ಲಿ. ಪದೇ ಪದೇ ಫಲಿಸುವ ಕ್ರಿಯೆಯೇ ಕಾವ್ಯದ ಮೂಲಭೂತವಾದ ನೆಲೆಗಳು. ಕವಿತೆ ಸಿಡಿದು ಚೂರಾಗುವುದು ಓದುಗನ ಹೃದಯದಲ್ಲಿ. ಸಂಜೆ ಸೂರ್ಯನ ಹಿತವಾದ ಬೆಳಕು ಮೈಯನ್ನಪ್ಪುವಂತೆ ಸಂಕಲನದ 'ರಾಮನೋ ಕೃಷ್ಣನೋ' (ಪುಟ 19) 'ಅಜ್ಜನ ಹೆಗಲ ಸುಕ್ಕುಗಳು' (ಪುಟ 43) 'ಗುರುರಾಯ' (ಪುಟ 48) ಇವು ನಮ್ಮನ್ನು ಕಾಡುತ್ತದೆ. ಹಲವು ಅರ್ಥಗಳಾಚೆ ನಮ್ಮನ್ನು ಒಯ್ಯಬಲ್ಲ ಈ ಕವಿತೆಗಳು ಕಾಲದ ನಿಗೂಢಗಳನ್ನು, ವರ್ತಮಾನದ ದಿಗ್‌ಭ್ರಮೆಗಳನ್ನು, ವ್ಯಕ್ತಿಯ ಅಂತರಂಗದ ಒಡಕು, ಸೀಳುಗಳನ್ನು ಏಕಕಾಲಕ್ಕೆ ಮಂಡಿಸುತ್ತವೆ. ಮಾತಿನ ಜಾರುತಪ್ಪದ ಹಿಡಿತ,

ನೇರ ಪ್ರತಿಫಲಿಸುವ ನೋಟಗಳು, ತಕ್ಷಣವೇ ಅಪ್ಪಿಬಿಡುವುದರಿಂದಾಗಿ ಸಂಕಲನ ನಮ್ಮ ಗಮನವನ್ನು ಸೆಳೆಯುತ್ತದೆ. ಮಾತು ಅತಿಯಾಗುವುದೂ ಇಲ್ಲಿ ದೋಷ ವಾದರೂ ಅದು ಇಲ್ಲಿ ಬದುಕಿನ ಚಿಹ್ನೆಯಾಗಿದೆ ಕಲೆಯಾಗಿದೆ !

ವಿನ್ಯಾಸ ಹಾಗೂ ಮುದ್ರಣದ ಅಚ್ಚುಮೆಚ್ಚನ್ನು ಪಡೆದಿರುವ "ಇನ್ನೊಬ್ಬಳು ಶಕುಂತಲೆ" ಬಹಳ ಸುಂದರವಾದ ಸಂಕಲನವನ್ನು ಕೆ. ಎಂ. ಮುನಿಕೃಷ್ಣಪ್ಪನವರು ಪ್ರಕಟಿಸಿದ್ದಾರೆ. ಸಂಕಲನದ "ನೆನಪಿನಂಗಳದಿ ಕತ್ತಲಾದಂತೆಲ್ಲ" "ಇನ್ನೊಬ್ಬಳು ಶಕುಂತಲೆ", "ಪೋಡಮೇಲಿನ ಹುರುಳಿ" – ಇವು ಮೂರು ಸಂಕಲನದ ಪ್ರಾತಿನಿಧಿಕ ಕವಿತೆಗಳು. ಇವು ಬೇರೆ ವಿಶಿಷ್ಟ ಕಾರಣಗಳಿಂದ ಗಮನ ಸೆಳೆಯುತ್ತವೆ. ಬೌದ್ಧಿಕ ಈಜಾಟಕ್ಕಿಂತಾ ಆಪ್ತವಾದ ಲವಲವಿಕೆ ಈ ಸಂಕಲನದ ವೈಶಿಷ್ಟ್ಯ. ಕಾವ್ಯ ಭಾಷೆ ಇಲ್ಲಿ ಸೂಕ್ಷ್ಮ ಪಡೆಯದೆ ಹೋದರೂ ಭಾವಲಯಗಳು ನುಗ್ಗಿ ಬರುತ್ತದೆ. ಬಹು ಮುಖೀ ಪ್ರಜ್ಞೆ ಮತ್ತು ಸಂಘರ್ಷಗಳು ಇಲ್ಲಿ ಗೈರುಹಾಜರಿಯಾಗಿದೆ. ಈ ದೃಷ್ಟಿ ಯಿಂದ ಸಂಕಲನ ಒಂದು ಕಡೆ ಸಂತೋಷವನ್ನೂ ಮತ್ತೊಂದು ಕಡೆ ಕೊರತೆಯನ್ನೂ ತರುತ್ತದೆ ! ಲಕ್ಷ್ಮೀಪತಿ ಕೋಲಾರರ ಮೊದಲ ಕೃತಿ ಎಂಬ ಯಾವ ಮನ್ನಣೆಯೂ "ನವಿಲು ಕಿನ್ನರಿ" ಸಂಕಲನಕ್ಕೆ ಬೇಕಿಲ್ಲ. ತನ್ನ ಪುರಾವೆಯನ್ನು ತಾನೇ ಪ್ರತಿಷ್ಠಾಪಿಸಿ ಕೊಳ್ಳುವ ಶಕ್ತಿ ಮತ್ತು ಪ್ರತಿಭೆ ಇದಕ್ಕುಂಟು ! ನೋವು ಇಲ್ಲಿ ನೋವಲ್ಲ ಧೀರ ಅನುಭವ ; ಘರ್ಷಣೆ ಇಲ್ಲಿ ಮನಕ್ಲೇಷವಲ್ಲ ಅದೊಂದು ದೀಪಕಾನುಭವ. ನಿಗೂಢ ಇಲ್ಲಿ ಭೀತಿಯಲ್ಲ, ಅದು ಲೋಕಗಳ ಕೀಲಿ, ಈ ಭಾವಗಳನ್ನು ತಂದುಕೊಡುವ "ನವಿಲು ಕಿನ್ನರಿ" (ಪುಟ 24) "ಗಾರುಡಿ ಗಂಗಭಾರತ" (ಪುಟ 40), "ಮಕ್ಕಳಿ ಘೋಪಾಲ್" (ಪುಟ 50) ನಮ್ಮ ಕಣ್ಣು ಮನಸ್ಸನ್ನು ಸೆಳೆಯುತ್ತದೆ. ಧ್ಯಾನಶೀಲವಾದ ಮನಸ್ಸು ಕೆಲಸ ಮಾಡುವ ಬಗೆಯೇ ಅಂಥದು, ಬಿ. ಚಿನ್ನಸ್ವಾಮಿ ಅವರ "ಕೊಂಡಿಗಳು ಮತ್ತು ಮುಳ್ಳುಬೇಲಿಗಳು" ಸಂಕಲನ ಒಂದು ವಿಶಿಷ್ಟ ದೀಪಕ ಶಕ್ತಿಯಿಂದ ನಮ್ಮನ್ನು ಸೆಳೆಯುತ್ತದೆ. ಈ ಸಂಕಲನದ ಹಿಂದೆ ನಿರಂತರ ಸಿನಿಕತನವಿಲ್ಲ, ಸಿದ್ಧಾಂತಗಳನ್ನು ಘೋಷಣೆ ಹೇಳಿಕೆಗಳ ಮಟ್ಟದಲ್ಲಿ ಮಾತ್ರ ಗ್ರಹಿಸುವಂಥಾ ಪೋಸುಗಾರಿಕೆ ಇಲ್ಲ. ಇಲ್ಲಿ ಕವಿತೆ ನಿಗಿನಿಗಿ ಉರಿಯುವ ಕೆಂಡ. ಸತ್ಯದ ಲೋಕದ ಪರಿಸ್ಥಿತಿಯನ್ನು ನಿರುದ್ವಿಗ್ನ ಚಿತ್ತನಾಗಿ ಕುದಿಸುವ ಬಯಕೆ. ದಲಿತ ಬದುಕಿನ ದಾರುಣತೆಯನ್ನು ಅನಾವರಣ ಗೊಳಿಸುವ ಕ್ರಮವೇ ಇಲ್ಲಿ ವಿಶಿಷ್ಟ. 'ಊರ ತೆಂಕಣ ತಜ್ಞರು' (ಪುಟ 51) 'ನನ್ನ ಹತ್ತಿರದ ಬಂಧುಗಳು' (ಪುಟ 43) ಈ ಸಂಕಲನದ ಅಪೂರ್ವತೆಯನ್ನು ಸಾರುತ್ತದೆ. ಲಕ್ಷ್ಮೀಪತಿ ಕೋಲಾರದಂತೆ ಇದು ಚಿನ್ನಸ್ವಾಮಿಯವರ ಮೊದಲ ಸಂಕಲನ ಎಂಬುದು ಆಶ್ಚರ್ಯ ಹುಟ್ಟಿಸುತ್ತದೆ. ಸತ್ಯನಾರಾಯಣರಾವ್ ಅಣತಿ ಅವರ ಮೂರನೆಯ ಸಂಕಲನ 'ಭೂಮಿ ಬದುಕಿನ ಗಂಧ' ಸಂಗ್ರಹದಲ್ಲಿ ಅವರ ಕಾವ್ಯದ ಶಕ್ತಿ ಹೆಜ್ಜೆಗಳನ್ನು ಗುರುತಿಸಬೇಕಾಗಿದೆ. ಕಿಟಕಿ, ಬಾಗಿಲುಗಳನ್ನು ತೆಗೆದು ಸ್ವಚ್ಛ ತಿಳಿಬಿಸಿಲು ಮತ್ತು

ಗಾಳಿಯನ್ನು ಆಹ್ವಾನಿಸುವಂತೆ ಇಲ್ಲಿನ ಕಾವ್ಯ ನಮ್ಮನ್ನು ಎದುರುಗೊಳ್ಳುತ್ತದೆ. ಸರಳತೆ ಸೂಕ್ಷ್ಮ ಭಾವಗಳು ಇಲ್ಲಿ ಹದಗೊಂಡಿವೆ. ಬುದ್ಧನ ಬದುಕನ್ನು ಕುರಿತ 'ನಗುವ ಬುದ್ಧ' ಬರಿ ಕಥನಕವಲ್ಲ ; ಭಾವಗಳ ಹೆಜ್ಜೆಸಾಲು. 'ಕವಿಯು ಕಂಡದೆ ಕುಣಿದ ! ಅರ್ಥ ಹುಡುಕುತ ಮಣಿದ' ಎಂದು ಕೊನೆಗೊಳ್ಳುವ ಈ ನೀಳ್ಗವಿತೆ ಅತ್ಯುತ್ತಮ ರಚನೆಯಾಗಿದೆ. ಶಾಂತಿನಾಥ ದೇಸಾಯಿಯವರ 'ಎರಡು ಮಾತು' ಉಚಿತವೂ ಸಮರ್ಥವೂ ಆಗಿದೆ.

ಎಚ್ಚೆಸ್ಕೆ ಅವರ 'ದವನದ ಕೊನೆ' ಕುತೂಹಲಕ್ಕಾಗಿ ಗಮನಿಸಬಹುದು. 'ಕಾವ್ಯ ಬಂದಿದೆ' ಎಂಬ ಕವಿತೆ ಎಚೆಸ್ಕೆ ಅವರ ಕವಿತೆಯ ನೆಲೆಗಳನ್ನು ಸ್ಪಷ್ಟಪಡಿಸುತ್ತದೆ ! ಸದ್ಯದ ಕಾವ್ಯ ಸ್ಥಿತಿಗೆ ತಮ್ಮನ್ನು ಒಗ್ಗಿಸಿಕೊಳ್ಳುವ ಪ್ರಯತ್ನ ಮಾಡುತ್ತಿರುವಂತೆ ತೋರುತ್ತದೆ. ಸಂಭ್ರಮಗಳಿಂದ ಮುಕ್ತವಾದ ಇಲ್ಲಿನ ಕಾವ್ಯ ಪರಿಸರ ತೆಳುರ್ಝರಿಯ ಥರದ್ದು.

ಈ ದಶಕದ ಒಟ್ಟು ಕಾವ್ಯದಲ್ಲಿ, ಅನ್ಯತ್ವದ ಅರಿವು ಕಡಿಮೆಯಾಗಿ ದೇಸೀತನದ ಅರಿವು ಮೂಡಿದ ಬಗೆಗಳು ನಮ್ಮ ಕವಿತೆಯನ್ನು ಹೆಚ್ಚು ಧ್ಯಾನನಿಷ್ಠವನ್ನಾಗಿ ನೋಡುವಂತೆ ಮಾಡಿವೆ. ಭಾಷೆ, ವಸ್ತು, ಪ್ರತೀಕ-ಪ್ರತಿಮೆಗಳ ಪುನರ್ ಸಂಯೋಜನೆ, ಚಳುವಳಿಗಳ ಆಚೆ ದಾಟುವ ಕ್ರಿಯೆ, ಆಕ್ರಮಣದ ಹಾಗೂ ಆತಂಕಕಾರಿ ನಿಲುವುಗಳಿಂದ ಬಿಡುಗಡೆ ಪಡೆದು ಹೊಸ ನೆಲೆಗಳ ಹುಡುಕಾಟದತ್ತ ಧಾವಿಸುವ ಪ್ರಕ್ರಿಯೆ ಈ ದಶಕದ ಒಟ್ಟು ಸೃಜನಾತ್ಮಕವಾದ ಧೋರಣೆಯಾಗಿರುವುದು. ಮನುಷ್ಯನ ಅಸ್ತಿತ್ವಕ್ಕೆ ಮೂರ್ತ ರೂಪ ಕೊಡಬಲ್ಲ ಶಕ್ತಿ ಸಾಮರ್ಥ್ಯಗಳ ಧಾರಣ ಸಾಮರ್ಥ್ಯವನ್ನು ಪಡೆದಿರುವುದು ; ಇದಕ್ಕೆ ಸಾಕ್ಷಿಯೆಂದು ಹೇಳಬಹುದೆಂದು ತೋರುತ್ತದೆ.



"ನನ್ನ ಮನೆಯ ಸುತ್ತ ಗೋಡೆ ಕಟ್ಟಿಕೊಂಡು ಕಿಟಕಿಗಳನ್ನೆಲ್ಲಾ ತುರುಕಿ ಮುಚ್ಚಿಟ್ಟುಕೊಳ್ಳಲು ನನಗೆ ಇಷ್ಟವಿಲ್ಲ. ಎಲ್ಲ ನೆಲದ ಸಂಸ್ಕೃತಿಗಳೂ ಆದಷ್ಟೂ ಮಟ್ಟಿಗೆ ತಪಯಿಲ್ಲದೆ ಮನೆಯ ಸುತ್ತ ಬೀಸುತ್ತಿರಬೇಕೆಂದು ನನ್ನ ಆಸೆ. ಆದರೆ, ಬೀಸುವ ಗಾಳಿಯಲ್ಲಿ ನಾನೇ ಕ್ವಾಲುಕಿತ್ತು ಬೀಸಿ ಹೋಗುವುದನ್ನು ಮಾತ್ರ ಪ್ರತಿರೋಧಿಸುತ್ತೇನೆ."

–ಗಾಂಧೀಜಿ

# ಧರ್ಮರಾಯನ ಕೂಸು

―ರಮೇಶ್ ಚಂದ್ರ

೧

ಶೂನ್ಯಕ್ಕೆ ಕಣ್ಣು ಹಚ್ಚಿದವನ ಎದೆಗೆ
ದೂರು–ಎದುರು ಗ್ಯಾರೇಜಿನ ಬದಿಗೆ ಗೋಣಗಾಟ
ಪುಟ್ಟ ಹಸಿರುಗಿಡ ; ಕಸುವಿಲ್ಲದೆಯೂ ಚಿಗುರುವ ಹಟ
ಮಾರ್ಕೆಟ್ಟಿನ ಜನರ ರಭಸದ ನಡೆದಾಟಕ್ಕೆ
ಬೇಸರ ಪಟ್ಟಿಲ್ಲ ; ಚಿಗುರು ಹರಿದರೂ,
ಅವರು ಹಾಗೇ ತಾನೇ ?
ಕರುಣೆ ಬೇಡುವುದಿಲ್ಲ ತಾನು
ಒಡೆಯಬೇಕು, ಈ ನೆಲದೊಡಲ ಗೂಢ
ಚಿಗುರು, ಕೀಲಿ ಒಡೆದು
ಧರ್ಮರಾಯನ ಕೂಸು ಬೆಳೆಯಬೇಕು.
ಬೆಳೆದದ್ದು ಜೋಗಿಯ ಜೋಳಿಗೆಯಾಗಬೇಕು.

೨

ಬೇಲಿಯ ಜಿಗಿದು ಹೊರಬಂದವಳೇ,
ತಿರುಗಿ ನೋಡಿದಳು ಮನೆಯ
ಬಾಗಿಲಿಗೆ ಅಜ್ಜನ ಬಿಳಿಯ ದಟ್ಟಿ
ದುಪ್ಪಟದ ಹಾಸು ; ನೆರಳಿಗೆ ಕೂತ ಅಪ್ಪ !
ಪುಟ್ಟ ಹಸಿರು ಗಿಡದ ತುಂಬಾ ಹನಿಸಿದಳು
ಮನೆಯಾಚೆ ಎಲ್ಲಿಂದಲೋ ತಂದ ನೀರು
ಕೈಯೊಳಗೆ ಪ್ರೀತಿಯ ಪುಟ್ಟ ಬಟ್ಟಲು
ವರುಷಗಳ ಧೂಳು ತೊಳೆದ ಹಾಗೇ...
ತಟ್ಟನೆ, 'ಹಸಿರು, ಹಳದಿ, ನೀಲಿ, ಕೆಂಪು'
ಎಷ್ಟೊಂದು ಬಣ್ಣ !

ಹನಿಸಿದ ಹನಿ-ಹನಿಗೂ
ಮೈ ತುಂಬಾ ಚಿಗುರು
ಗಿಡವೋ ಮೈಕೊಡವಿ ಎದ್ದು,
ತ್ರಿವಿಕ್ರಮನ ಹಾಗೆ ಬೆಳೆದು
ಹತ್ತು ದಿಕ್ಕುಗಳಾಚೆ ಹಾಯ್ದು
ತಂದ ಮಾತು. ಪುಲಕೆಗೊಂಡವಳ ಹಾಗೆ
ಬೆರಗೋ ಬೆರಗು !

೩

ಒಂದು, ಎರಡು, ಮೂರು ...
ಗಿಡ ಸೊರಗಿದೆ, ಹಸಿರು ಬಾಡಿ
ಅವಳು ಬಂದಳು
ಪ್ರೀತಿಯ ಪುಟ್ಟ ಬಟ್ಟಲು ಬರಿದು
ಅವಳು ಹೋದಳು, ತನ್ನ ಪಾಡಿಗೆ ತಾನು
ದಿವ್ಯ ನಿರ್ಲಿಪ್ತತೆಯನೊದ್ದು.
ಬೇಲಿಯಾಚೆಗಿನ ಲೋಕ
ಹತ್ತು ದಿಕ್ಕಿನ ಮಾತು ;
ಹಸಿರೊಳಗೆ ಕಂಡ ಬಣ್ಣ
ಮಾರನೊಲಿಯದ ಕಾಯ
ತುಂಬಿ ಕರೆಯದ ಚಿಗುರು
ಎದೆಯೊಳಗೆ ಕಿನ್ನರಿಯು ನುಡಿಸಲಿಲ್ಲ
ಬೀದಿ ದೀಪಕ್ಕಷ್ಟು ಜೇಕಿದ
ಜೀರುಂಡೆಗಳ ಜೊತೆಯಷ್ಟೇ ಹಸಿರು
ಗಿಡದ ಮಾತು, ಉದ್ದ ರಾತ್ರಿಯ ಸಂಗಾತಿಗಳು.

೪

ಆದರೂ ... ಹಸಿರು ಗಿಡ ಈ ನೆಲದ
ಆಳಕ್ಕೆ ಬೇರಿಳಿಸಿ ವಟವೃಕ್ಷವಾಗಿ ಬೆಳೆಯಬೇಕು
ಬೆಳಗು-ಬೈಗುಗಳಿಗೆ, ಹಾಡದ ಪಕ್ಷಿಗಳಿಗೆ
ಸಿಗಬೇಕು, ಗಾಳಿಶಿಖರಕೆ ಏರಿ ತಂದ ಬೆಳಕು.
ಅವಳು ಹನಿಸದ ನೀರಿಗೂ
ಧರ್ಮರಾಯನ ಕೂಸು ಬೆಳೆಯಬೇಕು.

# ಕಪ್ಪು – ಬಿಳುಪು

ರವಿಕುಮಾರ ಕಾಶಿ

ಮೊನ್ನೆ, ಮೊನ್ನೆಯಷ್ಟೇ ವ್ಯಾನ್‌ಗೋನ ಚಿತ್ರವೊಂದು ಎಂಬತ್ತು ಬಿಲಿಯ ಡಾಲರ್‌ಗಳಿಗಿಂತಲೂ ಹೆಚ್ಚಿನ ಮೊತ್ತಕ್ಕೆ ಹರಾಜಿನಲ್ಲಿ ಮಾರಾಟವಾದ ಬೆಳಕಿನಲ್ಲಿ ವ್ಯಾನ್‌ಗೋನ ಬದುಕನ್ನು ಕಂಡರೆ–ಆತ ಊಟಕ್ಕೆ, ಬಣ್ಣಕ್ಕೆ, ಕ್ಯಾನ್‌ವಾಸಿಗೆ ಕಾಸಿರದೆ ಕಂಡವರಲ್ಲಿ ಕೈಯೊಡ್ಡಿದ್ದ ಚಿತ್ರ ಕಣ್ಣೆದುರಿಗೆ ನಿಲ್ಲುತ್ತದೆ. ಅಂದು ಮಾರಾಟವಾದ ಮೊತ್ತದ ಒಂದಂಶವಾದರೂ ವಾನ್‌ಗೋನಿಗೆ ಸಿಕ್ಕಿದ್ದರೆ ಆತ ಇನ್ನೂ ಎಂತೆಂಥಾ ಶ್ರೇಷ್ಠ ಕೃತಿಗಳನ್ನು ರಚಿಸುತ್ತಿದ್ದ ಎಂದು ಒಮ್ಮೆಗೇ ಅನ್ನಿಸದಿರದು. ಅದರೊಂದಿಗೇ– ಕಾಸು, ಕಾಸಿನೊಂದಿಗೆ ಬರುವ ಭೋಗ ಆತನ ತೀವ್ರತೆಯನ್ನು ಕುಗ್ಗಿಸುತ್ತಿತ್ತೇನೋ ಎಂಬೊಂದು ಅನುಮಾನ ಉಳಿದುಬಿಡುತ್ತದೆ. ಈ ನನ್ನ ಎರಡನೇ ಪ್ರತಿಕ್ರಿಯೆಗೆ ಕಲಾವಿದನ ಜೀವನದ ಕುರಿತಾದ ಅನನ್ಯವಾದ್ದೊಂದು ಧೋರಣೆ ಅಗತ್ಯವಾಗಿದ್ದರು, ಅದು ನೋವಿನಿಂದಲೇ ಹುಟ್ಟುವಂತಾದ್ದೇ ! ನಲಿವಿನಲ್ಲಿ ಹುಟ್ಟಲಾರದೆ, ಹರುಷದಲ್ಲಿ ಹುಟ್ಟಲಾರದೆ ?– ಇದು ಪ್ರಶ್ನೆ.

ಇಂದಂತೂ ವ್ಯಾನ್‌ಗೋನ ಚಿತ್ರಗಳ ಬೆಲೆ ಏರಿಬಿಟ್ಟಿರುವುದರಿಂದ, ಆತ್ಮಹತ್ಯೆಯಲ್ಲಿ ಕೊನೆಗೊಂಡ ಆತನ ಜೀವನದ ದುರಂತಕ್ಕೆ ಒಂದು ವೈಭವೀಕರಣದ, ರೋಮ್ಯಾಂಟಿಕ್ಕಾದ ಕಳೆ ಬಂದಂತೆ ಅನಿಸಿಬಿಡುತ್ತದೆ ನನಗೆ, ಕಲಾವಿದ ನಿಂತದ್ದು, ಕೂತದ್ದೆಲ್ಲ ಕಲೆಯಾಗುವ, ಕಲೆಯು ಧ್ಯಾನವಾಗುವ, ತಪಸ್ಸಾಗುವ ಸ್ಥಿತಿ ಇಲ್ಲಿಂದಲೇ ಶುರುವಾಗೋದು. ಸಂಕೀರ್ಣವಾದ ಬದುಕೊಂದನ್ನು ಪರದೇಶಿಯಾದ ಪದಗಳಲ್ಲಿ ಹಿಡಿಯುವುದು ಕಷ್ಟದ ಕೆಲಸ. ಒಂದು ಮಟ್ಟದಲ್ಲಿ ದುಸ್ಸಾಧ್ಯವೂ ಹೌದು. ಆದರೆ ಅಭಿವ್ಯಕ್ತವಾದ ಪದಗಳಲ್ಲಿ ಹೊಮ್ಮುವ, ಚಿತ್ರಕಲಾವಿದನ ಜೀವನ ಮೂಲಕ್ಕೆ ಹತ್ತಿರವಾಗದ್ದಕ್ಕೆ, ಪ್ರಾಮಾಣಿಕವಾಗದ್ದಕ್ಕೆ ಒಂದು ಹಂತದ ಜವಾಬ್ದಾರಿಯನ್ನು ಕಲಾವಿದನ ಜೀವನವನ್ನು ಪದಗಳಲ್ಲಿ ಚಿತ್ರಿಸುವ ಸಾಹಿತಿಗಳು ಹೊರಲೇಬೇಕು ಎಂಬುದೂ ದಿಟ

ಕಲಾವಿದ ಬದುಕಿ ಬಾಳಿದ ಜೀವನಕ್ಕೆ ಹತ್ತಿರವಾದದ್ದು, ಪ್ರಾಮಾಣಿಕವಾದುದು ಯಾವುದೆಂಬುದನ್ನು ನಿರ್ಧರಿಸುವುದು ಕಷ್ಟದ ಕೆಲಸ. ಇಂಥ ಇಸವಿಯಲ್ಲಿ, ಇಂಥ ದಿನ ಹುಟ್ಟಿದ, ಇಂಥ ದಿನ ಮದುವೆಯಾದ, ಇಂಥ ದಿನ ಸತ್ತ ಎಂಬ Factsಗಳನ್ನು ನೀಡುವ ಬಯಾಗ್ರಫಿ ಶ್ರೇಷ್ಠವೋ ಅಥವಾ ಪದಸಮುಚ್ಛಯಗಳ ಜಾಲ ಹೆಣೆದು

ವರ್ಣಿಸುವುದು ಮೇಲೋ ಎಂಬ ಪ್ರಶ್ನೆ ಬಂದಾಗ – ಮೊದಲನೆಯದು ಕೇವಲ ಬೋರು ಹೊಡೆಸುವ ಅಂಕಿ ಅಂಶಗಳಷ್ಟೇ ಆದರೂ ಪದಗಳಲ್ಲಿ ವ್ಯಕ್ತವಾಗುವ ಚಿತ್ರಣ ಕಲಾವಿದನ ಮೂಲ ಸ್ವಭಾವದ ಕಲ್ಪನೆಗೇ ಧಕ್ಕೆ ತರುವಂಥದ್ದಾದರೆ, ಅದಕ್ಕಿಂತಲೂ ದಿನಾಂಕಗಳು ಮೇಲು.

ಈ ರೀತಿಯ Distortionನ ಒಂದು ನೇರ ನಿದರ್ಶನ ನನ್ನ ಮುಂದಿರುವುದು ಕೆ. ವಿ. ಅಯ್ಯರ್‌ರವರ 'ರೂಪದರ್ಶಿ' ಕಾದಂಬರಿ. ರೂಪದರ್ಶಿಯಿಂದ ಹೊರಹೊಮ್ಮುವ ಮೈಕೆಲಾಂಜೆಲೋನ ಚಿತ್ರ ಒಳ್ಳೆಯ ಗುಣಗಳೆಲ್ಲವೂ ಮೈವೆತ್ತ ಸಂತನದ್ದು, ಕಲಾತಪಸ್ವಿಯದ್ದು. ಆದರೆ ವಾಸ್ತವ ಜೀವನದ ಮೈಕೆಲಾಂಜೆಲೋ ಮುಂಗೋಪಿ, ಕೋಪಿಷ್ಟ. ಜನರೊಂದಿಗೆ ಸಾಮಾನ್ಯವಾಗಿ ಸುಲಭವಾಗಿ ಬೆರೆಯಲಾರದವ. ಈ ವ್ಯತಿರಿಕ್ತ ಗುಣಗಳು ಅವನ ಪ್ರತಿಭೆ, ಶ್ರದ್ಧೆ, ಶ್ರೇಷ್ಠತೆಯನ್ನೇನೂ ಕುಗ್ಗಿಸಲ್ಲ. ಕೆ. ವಿ. ಅಯ್ಯರ್‌ರವರ 'ರೂಪದರ್ಶಿ' ಮೊದಲನೆಯದಾಗಿ ಮೈಕೆಲಾಂಜೆಲೋನ ಬಯಾಗ್ರಫಿ ಅಲ್ಲ. ಪುಸ್ತಕದಲ್ಲೆಲ್ಲೂ ಹಾಗೆ ಬರೆದಿಲ್ಲ ; ಅದೊಂದು ಶುದ್ಧ Fiction ಕಾದಂಬರಿ ಎಂದು ನೀವೆಂದರೂ – ಪುಸ್ತಕದಲ್ಲಿ ಕೇವಲ ಮೈಕೆಲಾಂಜೆಲೋನ ಹೆಸರಷ್ಟೇ ಬಳಸಲ್ಪಟ್ಟಿಲ್ಲ, ಆತನ ಸುತ್ತಮುತ್ತಲಿದ್ದ ವ್ಯಕ್ತಿಗಳು, ವಾತಾವರಣ, ಆತ ರಚಿಸಿದ ಚಿತ್ರಗಳ ಸ್ಪಷ್ಟ ಉಲ್ಲೇಖವಿರುವುದರಿಂದ ಸಾಮಾನ್ಯ ಓದುಗ ಮೈಕೆಲಾಂಜೆಲೋ ಬಗ್ಗೆ ಪಡೆದುಕೊಳ್ಳುವ ಗ್ರಹಿಕೆ ಯಾವ ರೀತಿಯದ್ದು ಎಂದು ಯೋಚಿಸಿದರೆ, 'ರೂಪದರ್ಶಿ' ತಪ್ಪು ಕಲ್ಪನೆಯನ್ನು ಕೊಡುತ್ತಿದೆ ಎಂಬ ನಿರ್ಧಾರಕ್ಕೆ ಬರಬಹುದು. ನಾನೂ ಸಹ ಚಿಕ್ಕವನಾಗಿದ್ದಾಗ ರೂಪದರ್ಶಿಯನ್ನು ಓದಿ ತೀರ ಪ್ರಭಾವಿತನಾಗಿದ್ದೆ. ಆದರೆ ಮುಂದೆ ನಾನು ಇದೇ ಕ್ಷೇತ್ರದಲ್ಲಿ ಅಧ್ಯಯನ ನಡೆಸಲು ಬಂದಾಗ ಹೆಚ್ಚು ವಿವರಗಳು, ಹೊಸ ಆಯಾಮಗಳು ದೊರೆತಂತೆಲ್ಲ ರೂಪದರ್ಶಿಯ ಮೈಕೆಲಾಂಜೆಲೋನ ಚಿತ್ರವನ್ನು ಮನಸ್ಸಿನಿಂದ ಅಳಿಸುವುದು ಸಾಧ್ಯವಾಯ್ತು. ಆದರೆ ಇದು ಎಷ್ಟು ಜನಕ್ಕೆ ಸಾಧ್ಯ ?

ಇದೇ ಪುಸ್ತಕದೊಂದಿಗೆ Irwing Stone ಎಂಬ ಸಾಹಿತಿಯ ಮೈಕೆಲಾಂಜೆಲೋ ಕುರಿತ ಪುಸ್ತಕ Agonny & Ecstasy ಪುಸ್ತಕವನ್ನು ಹೋಲಿಸಿದ್ದಾದರೆ ಕೆ. ವಿ. ಅಯ್ಯರ್‌ರವರು ಸೋತಿದ್ದೆಲ್ಲಿ ಎನ್ನುವುದು ಅರಿವಾದೀತು. Irwing Stone ಈ ಪುಸ್ತಕವನ್ನು ಬರೆಯುವ ಮುಂಚೆ ಎಷ್ಟೆಲ್ಲ ಮಾಹಿತಿ ಸಂಗ್ರಹಿಸಿ, ಅವನ ಜೀವನ, ಕೃತಿಗಳ ಅಧ್ಯಯನ ನಡೆಸಿದ್ದಾನೆ. ಅದರಿಂದಲೇ ಈ ಪುಸ್ತಕ ಅಷ್ಟೊಂದು ಪ್ರಭಾವಕಾರಿಯಾಗಿದೆ. ಅವನ ವಾನ್‌ಗೋ ಕುರಿತ ಪುಸ್ತಕ Lust for Life ಕೂಡ ಅಷ್ಟೇ ಅಧಿಕೃತವಾಗಿದೆ.

ಮೇಲೆ ಹೇಳುತ್ತಿದ್ದುದು ಒಬ್ಬ ಸೂಚಿತ ಕಲಾವಿದನ ಸಂದರ್ಭವಾದರೆ spesific ಅಲ್ಲದ ಸಾಮಾನ್ಯವಾಗಿ ಕಲಾವಿದರ ಬಗ್ಗೆ ಇರುವ, ಬೆಳೆಸಿರುವ ಗ್ರಹಿಕೆ

ಪ್ರತಿಕ್ರಿಯೆ ಮತ್ತೊಂದು, ಚಿತ್ರಕಲಾವಿದರ ಪಾತ್ರವಿರುವ ಅನೇಕ ಕಥೆ, ಕಾದಂಬರಿ, ಟಿ. ವಿ. ಚಿತ್ರಗಳು, ಸಿನಿಮಾಗಳಲ್ಲಿ ಕಾಣಬಹುದಾದ ಕಲಾವಿದ–ಕುರುಚಲು ಗಡ್ಡ ಬಿಟ್ಟ ಜುಬ್ಬಧಾರಿ, ಭಾವುಕ, ಇನ್ನೇನು ಅರೆಹುಚ್ಚನೇ ಎನ್ನಬಹುದಾದ ವ್ಯಕ್ತಿ ; ಟಿ. ವಿ. ಯಲ್ಲಿ ಬಂದ ತೆನಾಲಿ ರಾಮನ ಸೀರಿಯಲಲ್ಲಿ ಅನೇಕ ಕಾರ್ಟೂನ್‌ಗಳಲ್ಲಿ ಕಂಡುಬರುವ ನವ್ಯ ಹಾಗೂ ಸೃಜನಶೀಲ ಕಲೆಯ ಲೇವಡಿ ಇವೆಲ್ಲ ಬೇಜವಾಬ್ದಾರಿಯುತ ಒಕ್ಕಣ್ಣಿನ ನೋಟಗಳು.

ನಾನೊಮ್ಮೆ ದೆಲ್ಲಿಯಿಂದ ಒರೋಡಾಕ್ಕೆ ಪ್ರಯಾಣ ಮಾಡುತ್ತಿರುವ ಸಂದರ್ಭ ದಲ್ಲಿ ನನ್ನ ಎದುರಿಗೆ ಕೂತಿದ್ದ ಸಂಸಾರವೊಂದು ಪರಿಚಯವಾಯ್ತು. ಹಾಗೇ ಮಾತು ಮುಂದುವರೆದು ನನ್ನ ಉದ್ಯೋಗದ ಮಾತು ಬಂತು. ನಾನು ಕಲಾವಿದ ಎಂದಾಗ ಅವರು ಆಶ್ಚರ್ಯಪಡುತ್ತಾ 'ತುಮ್ ಆರ್ಟಿಸ್ಟ್ ಜೈಸೆ ನೈ ದಿಖತಾ ಹೈ ! (ನೀನು ಕಲಾವಿದನಂತೆ ಕಾಣುವುದೇ ಇಲ್ಲ) ಎಂದರು ಜುಬ್ಬ ಧರಿಸಿರದ, ಗಡ್ಡವಿಟ್ಟಿರದ ನನ್ನನ್ನು ಕಂಡು, ಅವರ ಈ ಹೇಳಿಕೆ ನನ್ನ ಕಿವಿಯಲ್ಲಿ ಗುನುಗುತ್ತಾ, ಅವರ ಕಣ್ಣಿನಲ್ಲಿ ಉಂಟಾದ (ಕಾದಂಬರಿ, ಟಿ.ವಿ., ಸಿನಿಮಾ ಎಲ್ಲ ಮಾಧ್ಯಮಗಳ ಪ್ರಭಾವವೂ ಸೇರಿ) ಕಲಾವಿದನ Prototype ಅವನಿಂದ ಅವರು ನಿರೀಕ್ಷಿಸುವ ವೇಷಭೂಷಣ, ನಡವಳಿಕೆ, ವಕ್ರತೆಗಳು ನನ್ನನ್ನು ಗಂಭೀರವಾಗಿ ಯೋಚಿಸುವಂತೆ ಮಾಡಿದೆ.

ಇದೆಲ್ಲ ನಾನು ಬರೆಯುವಾಗ ಜನ ಕಲಾವಿದನನ್ನು ನೋಡುವ ರೀತಿ ಎರಡು ಬಗೆಯದ್ದಾಗಿ ನನಗೆ ತೋರುತ್ತದೆ. ಒಂದು admiration – ಮೆಚ್ಚುಗೆ ಅವನ ಜೀವನವನ್ನೂ ಕೃತಿಯನ್ನು ಮಾತಿನ ಜಾಲದಲ್ಲಿ ಮೋಡ ವಾಗಿಸಿ ಆಶ್ಚರ್ಯ ಪಡುವ ರೀತಿ. ಇನ್ನೊಂದು contempt, contemptಅನ್ನುವುದಕ್ಕಿಂತ ಕಲಾವಿದನ ವಕ್ರ ನಡವಳಿಕೆಗಳನ್ನು (ecctentric behaviour) mystify ಮಾಡುವ ರೀತಿ. ಆದರೆ ಎರಡರಲ್ಲೂ ನನಗನ್ನಿಸುವಂತೆ ವಾಸ್ತವದ ಅರಿವಿರದು. ಕಲಾವಿದನ ಬಗ್ಗೆ ನಿಜವಾಗಿ ಬೇಕಾದ್ದು ಗೌರವವಷ್ಟೆ.

ಕಲಾವಿದನನ್ನು ತೀರ ಒಳ್ಳೆಯವನೆಂತಲೂ ನೋಡದೆ, ವಕ್ರವಾಗಿಯೂ ನೋಡದೆ, ಆತನ ಶ್ರದ್ಧೆ, ಸಾಧನೆ, ಪ್ರತಿಭೆಗಳ ಜೊತೆಜೊತೆಗೇ ಆತನ ಮಾನವ ಸಹಜವಾದ ಕುಂದು, ಕೊರತೆಗಳನ್ನೂ ಸಹಾ ಗ್ರಹಿಸಿ, ಒಟ್ಟು ಸಾಮಾಜಿಕ ಚೌಕಟ್ಟಿನಲ್ಲಿ ಆತನ ಕೊಡುಗೆ ಅರಿತಾಗಲೆ ಗೌರವ ನೀಡುವುದು ಸಾಧ್ಯ. ಗೌರವ ನೀಡುವುದನ್ನು ಕಲಿತಾಗಲೆ ನಾವು ಇತರ ಎಲ್ಲ ಚಟುವಟಿಕೆಗಳೊಂದಿಗೆ ಕಲೆಯನ್ನೂ ಸಮನಾಗಿಟ್ಟು ನೋಡಲು ಸಾಧ್ಯವಾದೀತು.

ಸಮತೆ ಏಕೆಂದಿರಾ ! – ಎಷ್ಟೆಂದರೂ ಜೀವನಕ್ಕಿರುವ ಅನೇಕ ಸಾಧ್ಯತೆಗಳಲ್ಲಿ ಕಲಾವಿದನಾಗುವುದೂ ಒಂದಷ್ಟೆ.



# ಒಂದು ಚರಮಗೀತೆ

ಎಂ. ಎಸ್. ಆನಂದ್

ತಪ್ಪಿಸಿಕೊಳ್ಳಬಹುದು
ಆಸ್ಪತ್ರೆ, ವೈದ್ಯರಿಂದ,
ಅಪರಿಚಿತ ಜಾಗಗಳ
ವಿಚಿತ್ರ ವಾಸನೆಗಳಿಂದ
ಪರಿಣಿತರ ಶಾಂತ ನಿರ್ಲಿಪ್ತ
ಕೌಶಲ್ಯತೆಯಿಂದ
ಸ್ವತಂತ್ರವಾಗಿರಬಹುದು
ಸಿರೆಂಜು ಸೂಜಿಗಳ
ಚುಚ್ಚಾಟ ಜಂಜಾಟದಿಂದ
ಜನರಲ್ ವಾರ್ಡು, ವಾರ್ಡು ಬಾಯ್
ನರ್ಸುಗಳ ಒಡನಾಟದಿಂದ, ಬಲುಕಾಟದಿಂದ,
ಸರ್ಜನ್ನುಗಳ ಬಿಳಿ ಬಟ್ಟೆಯು
ಹಿಂದಿನ ನೋವಿನಿಂದ
ಕತ್ತರಿಯೋ, ಇನ್ನಾವುದೋ ವಸ್ತು
ಜಠರದೊಳಗುಳಿಯುವ ಅವಗಢದಿಂದ ;
ಕಾಣಲು ಸಾಧ್ಯವೇ ?

ಸ್ವಲ್ಪವಾದರೂ ಸಂತಸವ !
ಭಯದ ಜೀವನದಲ್ಲಿ
ಕನಸ ಕದಡಿ ನನಸಿನಲ್ಲಿ,
ಏಳಬೇಕವನು, ಇಲ್ಲವಾದಲ್ಲಿ
ನಾಲ್ಕು ಕತ್ತಲ ಬಿಳಿ ಗೋಡೆಗಳ
ನಡುವೆ ಸಾವ ಠಾವು !
ಹತ್ತಿರದಲ್ಲಿ ಯಾರಿದ್ದರೇನು ? ಇಲ್ಲದಿದ್ದರೇನು ?

ಹೋಗಲಿ ಬಿಡಿ
ದೇಹದೊಳಗಿನ ಶಾಂತಿಯು ದಾಟಿ
ಅವನ ಮನ
ಜೀವ, ಜೀವನದರ್ಥವ ತಿಳಿಯುವುದಕ್ಕೆ
ಮಾಂಸ, ಮದುವೆ, ಮಸಣದ
ನಡುವಿನ ಸಂಬಂಧ ಅರಿಯುವುದಕ್ಕೆ
ನಿಜ ತಿಳಿಯುವುದಕ್ಕೆ
ಅವನ ಖಾಸಗೀ ಕಿಟಕಿಗಳ
ಅಗಾಧದೃಷ್ಟಿಯಾಚೆಗೆ ಹೋಗಲಿ
ಚಿರಂತನ ಅಂತ್ಯವಾರಂಭದೆಡೆಗೆ
ಅಂತಿಮ ಘಂಟೆಯ
ಅತ್ಯಂತಿಮ ಕ್ಷಣದ ಕಡೆಗೆ
ಕಣ್ಣಾಲಿಗಳು ಶೂನ್ಯ ದಿಟ್ಟಿಸುವ ಮುನ್ನ

ಗೋಚರಿಸಲಿ ತಿಳಿಸತ್ಯ
ಆರು ಅಡಿ ಭೂಮಿಯಡಿ ಸೇರಿಹೋಗುವ ಮುನ್ನ.
ಹೋಗಲಿ ಬಿಡಿ
ಪದ ಪಂಕ್ತಿ ಕಾಣದ ಪ್ರಯಾಣಕ್ಕೆ,
ಅರಿವಿರದ, ತಿಳಿದಿರದ ಗುರಿಯೆಡೆಗೆ
ಸುಕ್ಕು ದೇಹ, ಜಡ್ಡು ಚಿಂತನೆ ಬಿಟ್ಟು,
ನಾನಿಲ್ಲದೆಡೆಗೆ
ನೀವಿಲ್ಲದೆಡೆಗೆ
ಏನಿಲ್ಲದೆಡೆಗೆ.

ಮೂಲ :
**Wendell Berry**
(Eligiac Poem)

Nothing is good or bad but thinking makes it so.

**–Shakespeare**

# ಕವಿತೆಯಲ್ಲಿ ಸಂಕೇತಗಳ ಸ್ಥಾನ

ಎನ್. ಎಸ್. ಶ್ರೀಧರಮೂರ್ತಿ

ಇಪ್ಪತ್ತನೆಯ ಶತಮಾನದಲ್ಲಿ "ಸಂಕೇತ"ಗಳನ್ನು ಬಳಸುವ ಬಗ್ಗೆ ವಿಶೇಷ ಚರ್ಚೆಯಾಯಿತು. ಇದಕ್ಕಿಂತ ಹಿಂದೆ ವಿಮರ್ಶಕರ ಗಮನ ಈ ನಿಟ್ಟಿನಲ್ಲಿ ಹರಿದಿರಲಿಲ್ಲ ಎಂದಲ್ಲ. ಆದರೆ ಇದಕ್ಕೇ ವಿಶೇಷ ಮಹತ್ವ ಬಂದದ್ದು ಇತ್ತೀಚೆಗೆ ಸರಳಾರ್ಥದಲ್ಲಿ ಸಂಕೇತ ಕೂಡ ಪ್ರತಿಮೆಯೆ, ರೂಪಕ ಉಪಮೆ ಮತ್ತು ಸಂಕೇತ ಪ್ರತಿಮೆಯ ಮೂರು ರೂಪಗಳು. ಇದರಲ್ಲಿ ಸಂಕೇತ ಅತ್ಯಂತ ಮಹತ್ವದ್ದಾಗಿದೆ. ಉಪಮೆಯಂತೆ ಸಂಕೇತವೂ ಹೋಲಿಕೆಯ ಒಂದು ತಂತ್ರವಲ್ಲ. ಅದು ಒಂದು ಅರಿಯುವ ವಿಧಾನ ಅನುಭವದ ವಿನ್ಯಾಸ, ಕವನವೊಂದರಲ್ಲಿ ಪ್ರತಿಮೆಯು ಸ್ವತಂತ್ರವಾಗಿ ಬಳಕೆಯಾಗಿದ್ದರೆ ಅದರದ್ದೇ ಆದ ವೈಶಿಷ್ಟ್ಯಗಳನ್ನು ಗುರುತಿಸುವಂತಿದ್ದರೆ ಒಟ್ಟಿನಲ್ಲಿ ತನ್ನ ಅರ್ಥವ್ಯಾಪ್ತಿಯನ್ನು ಪ್ರತಿಮೆ ತಾನೆ ನಿರ್ಧರಿಸಿಕೊಳ್ಳುವಂತಿದ್ದರೆ, ಆಗ ಅದು "ಸಂಕೇತ"ವಾಗುತ್ತದೆ.

ಈಗ ಕೊಂಚ ಸಂಕೇತದ ಅವಶ್ಯಕತೆಯ ಬಗ್ಗೆ ಚರ್ಚಿಸೋಣ. ತೀರ ಮೂರ್ತ್ಯದ ವಾಕ್ಯದ ಯಾವ ವಿವರಣೆಗೂ ಸಿಕ್ಕದಾದ ಅರ್ಥವ್ಯಾಪ್ತಿಯನ್ನು ಹಿಡಿದಿಡಲು ಭಾಷೆಯ ಸುಪ್ತ ಸಾಮರ್ಥ್ಯವನ್ನು ಬಳಸಿಕೊಳ್ಳಬೇಕಾಗುತ್ತದೆ. ಭಾಷೆಗೆ ಇಂತಹ ಸುಪ್ತ ಸಾಮರ್ಥ್ಯ ಇದೆಯೆ ? "ಹೌದು" ಎನ್ನುತ್ತಾನೆ ಪಿ. ಬಿ. ಷೆಲ್ಲಿ ಅದಕ್ಕೆ ಅವನ ವಿವರಣೆ "ಭಾಷೆ ಸಹ ಮೂಲಭೂತವಾಗಿ ಒಂದು ಸಂಕೇತವೆ." ಹಾಗಾದರೆ ಸಂಕೇತಗಳು ಮನುಷ್ಯನ ಮನಸ್ಸಿನ ಮೇಲೆ ಒಂದೇ ರೀತಿಯ ಪರಿಣಾಮ ಬೀರಬಲ್ಲುದಾದರೆ ಮನುಷ್ಯನ ಮಾನಸಿಕ ಪ್ರಕ್ರಿಯೆ ಪೂರ್ವ ನಿರ್ಧರಿತವಾದ ಒಂದು ಚೌಕಟ್ಟಿನಲ್ಲಿಯ ರೂಪುಗೊಂಡಿರುತ್ತವೆಯೆ ? ಎಂಬ ಸಮಸ್ಯೆ ಬರುತ್ತದೆ. ಇಂತಹ ಸಾಧ್ಯತೆಯನ್ನು ಅಲ್ಲಗಳೆಯುತ್ತಾರೆ. ಇದನ್ನು ಲಕ್ಷಿಸಿ ಡಬ್ಲ್ಯು. ಬಿ. ಏಟ್ಸ್ ಹೇಳುತ್ತಾನೆ. "ಮಾನವನ ಅಖಂಡ ಸ್ಮರಣಾ ಶಕ್ತಿ ಇದಕ್ಕೆ ಕಾರಣ."

"ಸಂಕೇತ"ಗಳ ಕುರಿತು ಮೊದಲು ಪ್ರಸ್ತಾಪಿಸಿದವನು ನನ್ನ ಗಮನಕ್ಕೆ ಬಂದಂತೆ ಎಸ್. ಟಿ. ಕಾಲ್ರಿಜ್. ಅವನ ಅಭಿಮತದಂತ "ಸಂಕೇತ ಕಾವ್ಯದ ಅನಿವಾರ್ಯ ಘಟಕ ಇದರ ಮುಖ್ಯ ಉಪಯೋಗವೆಂದರೆ ಶಬ್ದ ಮತ್ತು ಅರ್ಥಗಳ ನಡುವಿನ (FORM & CONTENT) ವಿರೋಧಾತ್ಮಕ ಸಂಬಂಧವನ್ನು ಅಳಿಸಿ ಹಾಕುವುದು." ಇದಕ್ಕೆ ಕ್ರೋಚೆ, ಕೊಲಿಂಗ್‌ವುಡ್, ರಿಚರ್ಡ್ಸ್, ಸುಸಾನ್, ಲ್ಯಾಂಗರ್ ಮೊದಲಾದವರ ಸಮ್ಮತಿ ಇದ್ದಂತೆ ತೋರುತ್ತದೆ. ನಂತರ ಬಂದ ಅಮೇರಿಕಾದ ಕವಿ

ಎಡ್ಗರ್ ಅಲೆನ್‌ಪೂ ಕವನಕ್ಕೆ ನೀಡುವ ವಿವರಣೆ ಹೀಗೆ "ಕಾವ್ಯ ಸಂಕೇತಗಳ ಬಹುರೂಪಿ ಸಂಯೋಜನೆ" ಇವನ ವಿಚಾರಗಳಿಂದ ಪ್ರಭಾವಿತರಾದ ರೆಂಬಾರ್ಡ್ ಮೆಲಾರ್ಮ ಮೊದಲಾದವರು ಫ್ರಾನ್ಸಿನಲ್ಲಿ "ಸಂಕೇತವಾದ" ಎಂಬ ಸಾಹಿತ್ಯಿಕ ಚಳುವಳಿಯನ್ನು ಹುಟ್ಟುಹಾಕಿದರು. ವ್ಯಕ್ತಿಯ ಅಂತರಂಗ ಮತ್ತು ಬಹಿರಂಗ ಜಗತ್ತಿಗೂ ಇರುವ ವ್ಯತ್ಯಾಸವನ್ನು ಅವರು ಅಳಿಸಲು ಪ್ರಯತ್ನಿಸಿದರು. ಆಂಗ್ಲ ಕವಿಗಳಾದ ಹೂಮ್ ಪಾಂಡ್ ಮತ್ತು ಟಿ. ಎಸ್. ಎಲಿಯಟ್ ಸಹ ಕೆಲ ಸಮಯದ ವರೆಗೆ ಈ ಪಂಥದ ಮಾದರಿಯಲ್ಲಿ ಕವನ ರಚಿಸಿದಂತೆ ತೋರುತ್ತದೆ. ಆದರೆ ಈ ಪಂಥವನ್ನು ಸಂಪೂರ್ಣವಾಗಿ ಸಮರ್ಥಿಸಿದ ಡಬ್ಲ್ಯೂ. ಬಿ. ಏಟ್ಸ್ ಮಾತ್ರ ತನ್ನ ಕವನಗಳಲ್ಲಿ ಸಂಕೇತಗಳನ್ನು ಬಳಸಿದಂತೆ ತೋರುವುದಿಲ್ಲ. ಇದಕ್ಕೆ ಯಾವುದೇ ಅಭಿಪ್ರಾಯಕ್ಕೆ ಬದ್ಧನಾಗದ ಏಟ್ಸ್‌ನ ಸ್ವತಂತ್ರ್ಯ ವ್ಯಕ್ತಿತ್ವವೂ ಕಾರಣವಾಗಿರಬಹುದು.

ಇನ್ನು ನಮ್ಮ ಭಾರತೀಯ ಕಾವ್ಯ ಮೀಮಾಂಸಕರ ಅಭಿಪ್ರಾಯಕ್ಕೆ ಬಂದರೆ ನಮಗೆ ನಿರಾಸೆಯೇ ಕಾದಿದೆ. ಅವರು ಸಂಕೇತಗಳ ಬಳಕೆ ಇರಲಿ ಕಾವ್ಯದಲ್ಲಿ ಬಳಕೆಯಾಗಬೇಕಾದ ಭಾಷೆಯ ಬಗ್ಗೆಯೇ ಚಿಂತಿಸಿದಂತೆ ತೋರುವುದಿಲ್ಲ. ಆದರೆ ಇದರ ಅರ್ಥ ನಮ್ಮಲ್ಲಿ ಸಂಕೇತಗಳಿರಲಿಲ್ಲ ಎಂದಲ್ಲ ನಮ್ಮ ಪುರಾಣದ ದೇವ ದೇವತೆಗಳೆಲ್ಲರೂ ಸಂಕೇತಗಳೇ.

ಇನ್ನು ಕನ್ನಡ ಕಾವ್ಯಗಳಲ್ಲಿಯೂ ಸಂಕೇತಗಳ ಬಳಕೆ ಹೇರಳವಾಗಿದೆ. ನಮ್ಮ ಮಹಾಕವಿಗಳಾದ ಪಂಪ, ಕುಮಾರವ್ಯಾಸರು ಸಂಕೇತಗಳನ್ನು ಅರ್ಥಪೂರ್ಣವಾಗಿ ಬಳಸಿಕೊಂಡಿದ್ದಾರೆ. ಮಹತ್ವಪೂರ್ಣ ಸಂಕೇತಗಳು ರನ್ನ, ಜನ್ನ, ಬಸವಣ್ಣ ಮುಂತಾದವರಲ್ಲಿಯೂ ಕಾಣಸಿಕ್ಕುತ್ತವೆ. ಇನ್ನು ಹೊಸಗನ್ನಡಕ್ಕೆ ಬಂದರೆ ಇಂಗ್ಲೀಷ್ ಕವಿಗಳ ಪ್ರಭಾವಕ್ಕೆ ಸಿಲುಕಿದ ನವೋದಯ ಕವಿಗಳು ಹೇರಳವಾಗಿ ಸಂಕೇತಗಳನ್ನು ಬಳಸಿದ್ದಾರೆ. ಬೇಂದ್ರೆ ಮತ್ತು ಕುವೆಂಪುಅವರ ಕವಿತೆಗಳಲ್ಲಿ ಸಂಕೇತಗಳ ಅರ್ಥಪೂರ್ಣ ಬಳಕೆಯನ್ನು ಕಾಣಬಹುದು ಬೇಂದ್ರೆಯವರ "ಹಕ್ಕಿ ಹಾಡುತಿದೆ"ಯನ್ನಂತೂ ಸಂಕೇತಗಳ ಉತ್ತಮ ಬಳಕೆಗೆ ನಮ್ಮ ವಿಮರ್ಶಕರು ಉದಾಹರಣೆಯಾಗಿ ನೀಡುತ್ತಾರೆ.

ಸಂಕೇತಗಳ ಅರ್ಥಪೂರ್ಣ ಸಮರ್ಥ ಬಳಕೆಗೆ ಉದಾಹರಣೆಯಾಗಿ ನೀಡಬಲ್ಲ ಕವಿತೆ, ಕೆ. ಎಸ್. ನರಸಿಂಹಸ್ವಾಮಿಯವರ "ಶಿಲಾಲತೆ" ಕವನ ಸಂಕಲನದ "ಗಡಿಯಾರದಂಗಡಿಯ ಮುಂದೆ" ಎಂಬ ಕವಿತೆ, ಸಂಕೇತಗಳ ಸರಮಾಲೆಯಿಂದ ಇಡೀ ಕವನವನ್ನೇ ಕಾಲಕ್ಕೆ ಪ್ರತಿಮೆಯಾಗಿ ನಿಲ್ಲಿಸುವ ಅದ್ಭುತ ಚಾಕಚಕ್ಯತೆಯುಳ್ಳ ಕವನ ಅದು. ಈ ದೃಷ್ಟಿಯಿಂದ ಅದು ಕನ್ನಡದ ಮಹತ್ವಪೂರ್ಣ ಕವಿತೆಗಳಲ್ಲಿ ಒಂದು. ಈ ಕವಿತೆಯೇ ಕವಿತೆಗಳಲ್ಲಿನ ಸಂಕೇತದ ಅನಿವಾರ್ಯತೆಯನ್ನು ಒತ್ತಿ ಹೇಳಬಲ್ಲುದು.

# ಕಾಯುತ್ತೇನೆ

–ಭಾರತಿ ಕಿನ್ನಾಳ್

೧

ಮುಚ್ಚಿದ ನಿನ್ನ ಬಾಗಿಲ ಮುಂದೆ–
ನೆನಪ ಉಗಿಬಂಡಿ ಉರುಳುರುಳಿ ಸುರುಳಿ ಬಿಚ್ಚಿ ;
ಕುಕ್ಕರುಗಾಲಲ್ಲಿ ಕಾಯುತ್ತಾ ಕುಳಿತಿದ್ದೇನೆ,

ಈ ಮುಸ್ಸಂಜೆ ಹೊತ್ತು.

ಕತ್ತಲ ಗರ್ಭದೊಳಗೆ ಆಡೆರಡು ಕೊಂಬಿಗೆ ಕಟ್ಟಿಗೆ ಕಟ್ಟಿ,
ಥೀಗುಟ್ಟಿದಾಗ ಹುಟ್ಟಿದ್ದು ನಾನು ಕತ್ತಲ ಹಾವು :
ದಿನ ಕಳೆದು ಕೆಂಡ ಕುಡಿಯೊಡೆದು ಬೆಂಕಿ ಹೂವು–
ಮೈಯೆಲ್ಲ ಅರಳಿ ಕೆಂಪಗೆ, ಆಗಲೂ ನಾನು ಕಾದಿದ್ದೆ.
ಮುಟ್ಟಿದ್ದೆಲ್ಲ ಮುಟ್ಟಾಗಿ,
ಹತ್ತಿದ್ದೆಲ್ಲ ಕೆಂಡವಾಗಿ, ಜೀವಶಕ್ತಿ ಧಗ ಧಗ
ಹೊತ್ತಿ ಉರಿಯಿತೋ ಕಾಳ್ಗಿಚ್ಚು—
ಗಿಡಗಂಟೆ ಮರಬಳ್ಳಿ ಮರ ಗುಟ್ಟಿ ಭಸ್ಮಧೂಮ.
ನಾನು ಕಾದಿದ್ದೆ, ಮರವಾಗಿ, ಗಿಡವಾಗಿ, ಕೆಂಡವಾಗಿ.
ಬಿಸಿ ಕಳೆದು ಕಾಳ್ಗಿಚ್ಚು
ಮುದಿಸೂರ್ಯ ಸರಿಯುತ್ತಾ ಕತ್ತಲೆಗೆ,

ಬೆಚ್ಚನೆ ಕಾಯುತ್ತಾನೆ.

ಆಗ ಕಾದಿದ್ದೆ. ಈಗಲೂ ಕಾದಿದ್ದೇನೆ,
ಬಿಸಿ ಕಳೆದು ತಣ್ಣಗೆ,
ಹುಟ್ಟಿ ಬರುವ ಕತ್ತಲೆಗೆ,
ಮತ್ತೆ ಕಟ್ಟಿಗೆ ಥೀಗುಟ್ಟಿ ಕೆಂಡ ಹುಟ್ಟುವವರೆಗೆ

೨

ದೂರದಲ್ಲಿ ಅಕ್ಕಸಾಲಿ ಅಂಗಡಿಯೊಳಗೆ,
ನೆಲ ಕೊರೆದ ಹಳ್ಳದೊಳಗೆ ಕೆಂಡ ಕಾಯುತ್ತದೆ.
ಮಾಲೀಕ ತಿದಿಯೊತ್ತಿದ ಹಾಗೆ ಬುಸುಗುಡುತ್ತದೆ.
ಬೆಂಕಿಹೂವು ಮೈಯ್ಯರಳಿ,
ಆದೀತೋ ನಡುರಾತ್ರೆ ಪರಾಗ ಸ್ಪರ್ಷ....
ಮತ್ತೆ–
ಮುಂಜಾನೆ ಮುಟ್ಟಿದ್ದೆಲ್ಲ ಮುಟ್ಟಾಗುವ ಮೃದಾಹಸ್ಪರ್ಷ.



**ಒಂದು ಹೊಸ ಪುಸ್ತಕ :**

**ಪ್ರವೇಶ** (ಕಥಾ ಸಂಕಲನ) : ಪ್ರ : ಪ್ರತಿಭಾ ಯುವ ವೇದಿಕೆ

ಪ್ರತಿಭಾ ಯುವ ವೇದಿಕೆಯು ಉತ್ಸಾಹ ಅವಸರಗಳ ಪ್ರಯತ್ನದಿಂದ 'ಪ್ರವೇಶ' ಕಥಾಸಂಕಲನ ಹೊರ ಬಂದಿದೆ, ಈ ಸಂಕಲನದಲ್ಲಿ ಮೂವರು ಹೊಸ ಕಥೆಗಾರರ ಐದು ಕಥೆಗಳಲ್ಲಿ ಹೊಸ ರೀತಿಯ ಹುಡುಕಾಟ ನಡೆಸಿರುವುದು ಕಾಣುತ್ತದೆ. ಕೆ. ವೆಂಕಟೇಶ್‌ರ ಕಥೆಗಳು ಈ ಹೊಸತನದ ನಿಜವಾದ ಪ್ರಯತ್ನವಾಗಿ ಕಾವ್ಯಾತ್ಮಕ ಶಕ್ತಿ ಹೊಂದಿದೆ. ವೈ. ಮಂಜುಳಾ ತಮ್ಮ ಕಥೆಗಳನ್ನ ಜನಪ್ರಿಯ ಮ್ಯಾಗಜಿನ್ ಕಥೆಗಳ ಹಾಗೆ ಬರೆದಿದ್ದರೂ ಪ್ರಯತ್ನ ಪಟ್ಟರೆ ಅನುಭವಗಳ ಆಳಕ್ಕಿಳಿದು ಇನ್ನೂ ಉತ್ತಮ ಕಥೆಗಳನ್ನ ಇವರು ಬರೆಯಬಹುದು. ಇವರ ಕಥೆಗಳಲ್ಲಿ ಬರುವ ಅನಿರೀಕ್ಷಿತ ತಿರುವುಗಳೂ ಓದುಗರಿಗೆ ನಿರೀಕ್ಷಿತ ಎನ್ನಿಸುತ್ತದೆ. ಮಮತಾ ಜಿ. ಸಾಗರ ಅವರ ಕಥೆ 'ಪುಟ ತಿರುವಿದಾಗ' ಮನುಷ್ಯ ಸಂಬಂಧಗಳ ಬಗ್ಗೆ ಎತ್ತುವ ಪ್ರಶ್ನೆಗಳು ಓದಿದವರನ್ನ ಕಾಡುವ ಮೂಲಕ ಕಥೆ ಸಫಲವಾಗಿದೆ. ಶಾಂತಿನಾಥ ದೇಸಾಯಿಯವರ 'ಮುಕ್ತಿ' ನೆನಪಾಗುತ್ತದೆ. ಸಂಬಂಧಗಳ ಬಗ್ಗೆ ಹೇಳುವಾಗಿನ ಅಸ್ತಿತ್ವವಾದಿ ವಿವರಗಳನ್ನ ಇಲ್ಲಿ ಗುರುತಿಸಬಹುದಾಗಿದೆ. ಪುಸ್ತಕದ ಒಳ ಹೊರ ವಿನ್ಯಾಸಗಳ ಬಗೆಗೆ ಗೆಳೆಯರು ಇನ್ನಷ್ಟು ಯೋಚಿಸಿ ಆಕರ್ಷಕವಾಗಿ ಮಾಡಬಹುದಿತ್ತು, ಪುಸ್ತಕ ತರುವುದು ಒಳ್ಳೆಯ ಕೇಲಸವೇ ಆದರೂ ಇಷ್ಟೊಂದು ಆತುರದಲ್ಲಿ ಅಲ್ಲ !

–ಸಂ

## ಒಂದು ದರಿದ್ರ ಬೆಳಗು

ಪ್ರಹ್ಲಾದ್

ಹಾಸಿಗೆಯು ಸುತ್ತ ಸುರಿದು
ಕವಿದಿದ್ದ ಜಡತೆಯು ಯಾವುದೋ
ಮೂಲೆಯಲ್ಲೊಂದಷ್ಟು ಗುಟುಕು ಜೀವ ;
ಕಣ್ಣ ನಂಗಡಿಯು ಬಾಗಿಲು ತೆರೆದಾಗ
ದೆವ್ವದ ಹಾಗೆ ಎದುರು ನಿಂತಿತ್ತು
ಮತ್ತೊಂದು ಖಾಲಿ ದಿನ
ಗಡಿಯಾರದೆದೆಯು ಸುತ್ತಿಗೆ ಬಡಿತಕ್ಕೆ
ಸಾಂತ್ವನ ; ಇವತ್ತು ಕೊನೆಯ ದಿನ !
ನುಂಗುತ್ತಾ ನಿಂತ ಮಾತು
ಮೌನದ ಒಡಲಾಳಕ್ಕೆ ಜಿಗಿದು
ತೇಲುತ್ತಾ ಯಾನ ಮಾಡುವ
ಅದೇ ಯಾಂತ್ರಿಕ ಯತ್ನಕ್ಕೆ
ಗಾಳ ಬೀಸುತ್ತ
ತುದಿಯ ಹುಳುವಾಗುತ್ತಾ
ಮೀನಿನೊಳಗೆ ಮೀನು ಗಾಳಿದೊಳಗೆ
ದಿನದ ಕೊನೆಗೆ
ಜತನದಿಂದ ಉಳಿಯುವ ನಿರೀಕ್ಷೆ ;
ಯಾವುದೋ ಕಿಕ್ಕು
ಉಳಿದಿಲ್ಲದ ಲಕ್ಕುಗಳಿಗೆ !

## ಮುಗಿಸುವ ಮುನ್ನ....

---

ಕಳೆದ ಸಂಚಿಕೆಯು ಬಗ್ಗೆ ಅನೇಕರು ತಮ್ಮ ಮೆಚ್ಚುಗೆ ಸೂಚಿಸಿದ್ದಾರೆ, ಜೊತೆಗೆ ಉಪಯುಕ್ತ ಸಲಹೆಗಳನ್ನೂ ನೀಡಿದ್ದಾರೆ, ಅದರಲ್ಲಿ ಪ್ರಕಟವಾದ ಡಾ॥ ಜಿ. ಎಸ್. ಶಿವರುದ್ರಪ್ಪನವರ ಸಂದರ್ಶನ ನಮ್ಮಗಳ ಅವಸರ ಅವ್ಯವಸ್ಥೆಯ ಕಾರಣದಿಂದ, ಅನೇಕ ದೋಷಗಳಿಂದ ಅಚ್ಚಾಗಿದೆ, ಇದಕ್ಕಾಗಿ ಜಿ. ಎಸ್. ಎಸ್. ಅವರಲ್ಲಿ ಕ್ಷಮೆ ಯಾಚಿಸುತ್ತೇವೆ.

ಸಂಚಯದ ಸಂಪಾದಕ ಮಂಡಳಿ ಮತ್ತು ಸಲಹಾ ಮಂಡಳಿಗಳನ್ನ ವಿಸ್ತರಿಸುವ ಯೋಜನೆ ಇದೆ, ಇದರ ಮೂಲಕ ಇನ್ನೂ ಹೆಚ್ಚು ಉಪಯುಕ್ತವಾಗಿ ಸಂಚಯ ಹೊರ ಬರಬಹುದು. 'ಕನ್ನಡದ ಶ್ರೇಷ್ಠ ಕವಿತೆಗಳು' ಎನ್ನುವ ಹೊಸ ಅಂಕಣದಲ್ಲಿ ಕನ್ನಡದ ಹಿರಿಯ ಸಾಹಿತಿಗಳ ಅತ್ಯುತ್ತಮ ಕವಿತೆಗಳು ಮತ್ತು ಅವುಗಳ ಬಗ್ಗೆ ಒಂದು ಸ್ಥೂಲ ವಿಶ್ಲೇಷಣೆಯನ್ನೂ ಒಳಗೊಳ್ಳುವ ಸಂಚಿಕೆಗಳನ್ನು ಸಿದ್ಧಪಡಿಸಲು ಪ್ರಯತ್ನಿಸುತ್ತಿದ್ದೇವೆ, ಇದರ ಜೊತೆಗೆ ಪುಟಗಳ ಸಂಖ್ಯೆ ಹಿಗ್ಗಿಸುವ ಆಶಯುಕೂಡಾ ಇದೆ.

ಗಾಂಧಿ ಜಯಂತಿ ಪ್ರಯುಕ್ತ ಕೆಲವು ವಿಶೇಷ ಲೇಖನಗಳನ್ನ ಒಟ್ಟುಗೂಡಿಸುತ್ತಿದ್ದೇವೆ. ಇದನ್ನ ಒಂದು ವಿಶೇಷ ಸಂಚಿಕೆಯ ರೂಪದಲ್ಲಿ ತರುವ ಉದ್ದೇಶ ವಿದೆ, ಎಂದಿನಂತೆ ಗಾಂಧಿ ಸಾಹಿತ್ಯ ಸಂಘದ ಜೊತೆ ಗಾಂಧಿ ಜಯಂತಿ ಕಾರ್ಯಕ್ರಮ ನಡೆಸಲಾಗುತ್ತದೆ.

ನಮ್ಮ ಶಕ್ತಿ ಮೀರಿ ಪುಟಗಳ ಮಿತಿಯಲ್ಲೇ ಉತ್ತಮ ವಿಷಯಗಳನ್ನ ಕೊಡಲು ಪ್ರಯತ್ನಿಸುತ್ತಿದ್ದೇವೆ, ಇದಕ್ಕೆಲ್ಲಾ ಹಣದ ಅಗತ್ಯ ಬಹಳ ಇದೆ ದಯವಿಟ್ಟು ನಿಮ್ಮ ಚಂದಾಹಣ ಕಳುಹಿಸಿ, ಸಾಧ್ಯವಾದಲ್ಲಿ ಕೆಲಗೆಳೆಯರನ್ನು ಚಂದಾದಾರರನ್ನಾಗಿಮಾಡಿ, ಜಾಹೀರಾತುಗಳು ಅಥವಾ ನಂಬಿಕೆಯಿಟ್ಟು ಹಣದ ಸಹಾಯ ಒದಗಿಸುವುದಾದರೆ ಅದಕ್ಕೂ ನಮ್ಮೆಲ್ಲರ ಕೃತಜ್ಞತೆಯ ಸ್ವಾಗತವಿದೆ. ನಮ್ಮ ಹಂಬಲ ಆಶಯಗಳು ಹಿರಿದಾಗಿದೆ. ನಿಮ್ಮೆಲ್ಲರ ಸಹಕಾರ ಅಗತ್ಯವಾಗಿ ಬೇಕಾಗಿದೆ.

ಈ ಸಂಚಿಕೆ ಅನೇಕ ಕಾರಣಗಳಿಂದ ತಡವಾಗಿ ಪ್ರಕಟವಾಗುತ್ತಿದೆ. ಕ್ಷಮಿಸಿ.

–ಸಂಪಾದಕ

## ನಮ್ಮಲ್ಲಿ ದೊರೆಯುವ ಪುಸ್ತಕಗಳು

1. ಹಕ್ಕಿನಡಿಗೆ
(ಆಯ್ದ ಕವನ ಸಂಕಲನ)
ಪುಟ : 48 ; ಬೆಲೆ : 6-00

2. ಕಾರ್ಯ
ಅರವಿಂದ ಮಾಲಗತ್ತಿ
ಪುಟ : 72 ; ಬೆಲೆ : 5-00

3. ಅಜ್ಜಿ ಮನೆ ಬಹಳ ದೂರ
(ಮಕ್ಕಳ ಕವಿತೆಗಳು)
ಬೆಲೆ : 2-00

4. ಪ್ರವೇಶ
(ಕಥಾ ಸಂಕಲನ)
ಪುಟ : 40 ; ಬೆಲೆ : 6-00

5. ಇನ್ನೊಬ್ಬಳು ಶಕುಂತಲೆ
ಕೆ. ಎಂ. ಮುನಿಕೃಷ್ಣಪ್ಪ
ಬೆಲೆ : 15-00

6. ಹಾಲಿನವಳ ಲೆಕ್ಕ (ನಾಟಕಗಳು)
ನಮ್ಮ ಪ್ರಯಾಣ ಸಖರು
ಪುಟ : 48 ; ಬೆಲೆ : 6-00

ಪ್ರತಿಭಾ ಯುವ ವೇದಿಕೆ
ನಂ. 3399, 5ನೇ ಅಡ್ಡರಸ್ತೆ, ಗಾಯಿತ್ರಿ ನಗರ
ಬೆಂಗಳೂರು-560 003


- ಹೊಸ ಧ್ವನಿಗಳ ಸಾಹಿತ್ಯ ಸಂಕಲನ ಸಂಚಯ
- ಸಾಹಿತ್ಯ-ಕಲೆಯ ಬಗೆಗಿನ ಸ್ಪಂದನಕ್ಕೆ
- ಸಂಚಯಕ್ಕೆ ನಿಮ್ಮ ಲೇಖನ, ಕವಿತೆ, ವಿಮರ್ಶೆಗಳಿಗೆ ಸ್ವಾಗತವಿದೆ. (ಗಾತ್ರ ಮಿತವಾಗಿರಲಿ)
- ಇದಕ್ಕೆ ನೀವೂ ಚಂದಾದಾರರಾಗಿ, ನಿಮ್ಮ ಗೆಳೆಯವರನ್ನು ಚಂದಾದಾರರನ್ನಾಗಿಸಿ.


ವಿಳಾಸ :

'ಸಂಚಯ', ನಂ. 28, ಮಾರಮ್ಮನ ದೇವಸ್ಥಾನದ ರಸ್ತೆ,
8ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-3